# ಕರ್ನಾಟಕ ವಿಧಾನ ಪರಿಷತ್ತು

| | |
|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : 118 |
| ಸದಸ್ಯರ ಹೆಸರು | :ಶ್ರೀ ಹೆಚ್.ಎಂ.ರಮೇಶ್ ಗೌಡ (ವಿಧಾನಸಭೆಯಿಂದ ಚುನಾಯಿತರಾದವರು) |
| ಉತ್ತರಿಸುವ ದಿನಾಂಕ | : **16.02.2022.** |
| ಉತ್ತರಿಸುವ ಸಚಿವರು | : ಕಂದಾಯ ಸಚಿವರು |

| ಕ್ರ. ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ರಾಜ್ಯದಲ್ಲಿ ಈವರೆಗೆ ಒತ್ತುವರಿಯಾಗಿರುವ ಗೋಮಾಳಗಳ ಸಂಖ್ಯೆ ಎಷ್ಟು; ಕಂದಾಯ ಇಲಾಖೆ ಆ ಒತ್ತುವರಿಯಾದ ಗೋಮಾಳಗಳನ್ನು ಹಿಂಪಡೆದಿದೆಯೇ; ಒತ್ತುವರಿದಾರರ ವಿರುದ್ಧ ಯಾವ ಕ್ರಮ ಕೈಗೊಳ್ಳಲಾಗಿದೆ; (ವಿವರ ನೀಡುವುದು) | ರಾಜ್ಯದಲ್ಲಿ ಒಟ್ಟು 19,39,672-21.09 ಎಕರೆ/ಗುಂಟೆ ಗೋಮಾಳವಿದ್ದು ಈ ಪೈಕಿ 76,700 ಗೋಮಾಳಗಳನ್ನು ಒತ್ತುವರಿ ಮಾಡಲಾಗಿದೆ. ವಿವರಗಳನ್ನು **ಅನುಬಂಧ-1ರಲ್ಲಿ** ಲಗತ್ತಿಸಲಾಗಿದೆ.<br><br>ರಾಜ್ಯದಲ್ಲಿ ಒಟ್ಟು 62,72,811 ಎಕರೆ ಸರ್ಕಾರಿ ಜಮೀನು ಇದೆ. ಇದರಲ್ಲಿ ಒಟ್ಟು 14,27,195 ಎಕರೆ ಸರ್ಕಾರಿ ಜಮೀನು ಒತ್ತುವರಿ ಇದೆ. ವಿವಿಧ ನ್ಯಾಯಾಲಯದಲ್ಲಿರುವ ಪ್ರಕರಣಗಳು, ಅಕ್ರಮ-ಸಕ್ರಮ ಯೋಜನೆ ಹಾಗೂ ಸಾರ್ವಜನಿಕ ಉದ್ದೇಶಗಳಿಗೆ ಬಳಕೆಯಾಗಿರುವ ಒಟ್ಟು 10,20,978 ಎಕರೆ ಸರ್ಕಾರಿ ಜಮೀನು ಹೊರತುಪಡಿಸಿ, ಉಳಿದಂತೆ 40,62,17 ಎಕರೆ ಒತ್ತುವರಿ ಜಮೀನು ತೆರವುಗೊಳಿಸಬೇಕಾಗಿರುತ್ತದೆ. ಇದರಲ್ಲಿ 2,70,108 ಎಕರೆ ಸರ್ಕಾರಿ ಜಮೀನು ತೆರವುಗೊಳಿಸಲಾಗಿದೆ. ಉಳಿದಂತೆ 1,36,109 ಎಕರೆ ಒತ್ತುವರಿ ತೆರವುಗೊಳಿಸಲು ಬಾಕಿ ಇದ್ದು ಹಂತ ಹಂತವಾಗಿ ಕ್ರಮವಹಿಸಲಾಗುತ್ತಿದೆ.<br><br>ಒತ್ತುವರಿ ಪ್ರಕರಣಗಳನ್ನು ಸಮರ್ಥವಾಗಿ ತಡೆಯುವ ಸಲುವಾಗಿ ಕರ್ನಾಟಕ ಭೂ ಕಬಳಿಕೆ ನಿಷೇಧ ವಿಶೇಷ ನ್ಯಾಯಾಲಯವನ್ನು ರಚಿಸಲಾಗಿದೆ. ಒತ್ತುವರಿದಾರರ ವಿರುದ್ಧ ಕರ್ನಾಟಕ ಭೂ ಕಬಳಿಕೆ ನಿಷೇಧ ವಿಶೇಷ ನ್ಯಾಯಾಲಯದಲ್ಲಿ ಕರ್ನಾಟಕ ಭೂ ಕಂದಾಯ ಕಾಯ್ದೆ, 1964ರ ಕಲಂ 192ಎ ರನ್ವಯ ಪ್ರಕರಣಗಳನ್ನು ದಾಖಲಿಸಲಾಗುತ್ತಿದೆ. ವಿವರಗಳು ಈ ಕೆಳಕಂಡಂತಿದೆ: (31.12.2021ರಂತೆ)<br>1. ದಾಖಲಾಗಿರುವ ಪ್ರಕರಣಗಳು :20858<br>2. ಇತ್ಯರ್ಥಪಡಿಸಿದ ಪ್ರಕರಣಗಳು:4831<br>3. ಬಾಕಿ ಇರುವ ಪ್ರಕರಣಗಳು: 16027<br>4. ಶಿಕ್ಷ ವಿಧಿಸಲಾಗಿರುವ ಪ್ರಕರಣ ಸಂಖ್ಯೆ: 61ಜನರಿಗೆ ಒಂದು ವರ್ಷದಂತೆ ಶಿಕ್ಷೆಯೊಂದಿಗೆ ದಂಡ ವಿಧಿಸಲಾಗಿದೆ.<br>ಸರ್ಕಾರದ ಸುತ್ತೋಲೆ ಸಂಖ್ಯೆ: ಆರ್‌ಡಿ 20 ಎಲ್ ಜಿಪಿ 2020, ದಿ: 20.01.2020 ರಂತೆ ಸರ್ಕಾರಿ ಜಮೀನು |

| | | |
|---|---|---|
| | | ಒತ್ತುವರಿ ತೆರವುಗೊಳಿಸುವುದು, ಒತ್ತುವರಿದಾರರ ವಿರುದ್ಧ ಕ್ರಮ ಜರುಗಿಸುವುದು, ಒತ್ತುವರಿ ತೆರವುಗೊಳಿಸಲು ವಿಫಲರಾಗಿರುವ ಅಧಿಕಾರಿಗಳು/ಭೂ ಕಬಳಿಕೆಗೆ ಪ್ರೇರಣೆ ನೀಡಲು, ನಕಲಿ ದಾಖಲೆಗಳನ್ನು ಸೃಷ್ಟಿಸಲು ಸಹಕರಿಸಿ ಶಾಮೀಲಾಗಿರುವ ಅಧಿಕಾರಿ/ಸಿಬ್ಬಂದಿಗಳ ವಿರುದ್ಧ ಕಾನೂನು/ಶಿಸ್ತು ಕ್ರಮಗಳನ್ನು ಜರುಗಿಸಲು ಸೂಚನೆ ನೀಡಲಾಗಿದೆ. |
| ಆ) | ರಾಜ್ಯದ ಬಹುತೇಕ ತಾಲ್ಲೂಕು ಕಚೇರಿಗಳಲ್ಲಿ ರೈತರ ಆರ್.ಟಿ.ಸಿ.ಯಲ್ಲಿ ಬೆಳೆ ನೋಂದಾವಣೆ, ಪಹಣಿ ನೋಂದಾವಣೆ ಮುಂತಾದ ಕೆಲಸಗಳು ಸುಸೂತ್ರವಾಗಿ ಆಗುತ್ತಿಲ್ಲ ಎನ್ನುವ ದೂರುಗಳು ಕೇಳಿ ಬರುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; ಬಂದಿದ್ದಲ್ಲಿ, ಈ ಬಗ್ಗೆ ಯಾವ ಕ್ರಮ ಕೈಗೊಳ್ಳಲಾಗಿದೆ; | ಪ್ರಸ್ತುತ ಬೆಳೆ-ಸಮೀಕ್ಷೆ ತಂತ್ರಾಂಶದ (Crop-Survey) ಮುಖಾಂತರ ಸ್ವೀಕೃತವಾಗುವ ಆಯಾ ಋತುಮಾನದ ಬೆಳೆ ವಿವರಗಳನ್ನು ಮಾತ್ರ ಪಹಣಿಯಲ್ಲಿ ಇಂಡೀಕರಿಸಲಾಗುತ್ತಿದೆ.<br><br>ಪಹಣಿ ನೋಂದಣೆಯಲ್ಲಿ ತಾಂತ್ರಿಕ ಸಮಸ್ಯೆ ಉದ್ಭವಿಸಿದಲ್ಲಿ ಹಂತ ಹಂತವಾಗಿ ಕ್ರಮ ಕೈಗೊಳ್ಳಲಾಗುತ್ತಿದೆ. |
| ಇ) | ತಾಲ್ಲೂಕು ಕಚೇರಿಯ ಭೂಮಿ ಕೇಂದ್ರವನ್ನು ಖಾಸಗಿ ನಿರ್ವಹಣೆಗೆ ಕೊಡಬೇಕು ಅನ್ನುವ ಆಗ್ರಹ ಕೇಳಿ ಬಂದಿರುವ ಕುರಿತು ಸರ್ಕಾರದ ನಿಲುವೇನು; | |
| ಈ) | ತಾಲ್ಲೂಕು, ಹೋಬಳಿ ಕೇಂದ್ರಗಳ ವ್ಯಾಪ್ತಿಯಲ್ಲಿ ಜಮೀನುಗಳ ಸರ್ವೆ ಕಾರ್ಯ ಸಮರ್ಪಕವಾಗಿ ನಡೆಯುತ್ತಿಲ್ಲ ಎನ್ನುವ ಆರೋಪಗಳು ಕೇಳಿ ಬಂದಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; ಈ ಕುರಿತು ಸರ್ವೆ ಅಧಿಕಾರಿಗಳ ನೇಮಕಾತಿ ಪ್ರಕ್ರಿಯೆ ಪ್ರಸ್ತುತ ಯಾವ ಹಂತದಲ್ಲಿದೆ? | ಭೂ ಮಾಪನ ಇಲಾಖೆಯಲ್ಲಿ ಖಾಲಿ ಇರುವ 79 ಭೂ ದಾಖಲೆಗಳ ಸಹಾಯಕ ನಿರ್ದೇಶಕರುಗಳ ಪೈಕಿ ನೇರ ನೇಮಕಾತಿಯಿಂದ ಭರ್ತಿ ಮಾಡಬೇಕಾದ 32 ಹುದ್ದೆಗಳನ್ನು ಹಾಗೂ ನೇರ ನೇಮಕಾತಿ ಕೋಟಾದಡಿ ಖಾಲಿ ಇರುವ 700 ಭೂ ಮಾಪಕರ ಹುದ್ದೆಗಳನ್ನು ನೇರ ನೇಮಕಾತಿ ಮೂಲಕ ಭರ್ತಿ ಮಾಡಲು ಆರ್ಥಿಕ ಇಲಾಖೆಯ ಸಹಮತಿಯನ್ನು ಕೋರಲಾಗಿರುತ್ತದೆ.<br><br>ಮುಂಬಡ್ತಿ ಮೂಲಕ ಭರ್ತಿ ಮಾಡಬೇಕಾದ ಹುದ್ದೆಗಳನ್ನು ಜೇಷ್ಠತೆಯ ಆಧಾರದ ಮೇಲೆ ಬಡ್ತಿ ನೀಡಲು ಪರಿಶೀಲಿಸಲಾಗುತ್ತಿದೆ. |

ಸಂಖ್ಯೆ: ಆರ್‌ಡಿ 02 ಎಲ್‌ಜಿಕ್ಯೂ 2022

(ಆರ್.ಅಶೋಕ)
ಕಂದಾಯ ಸಚಿವರು

## ಪ್ರಶ್ನೆ ಸಂಖ್ಯೆ 118ಕ್ಕೆ ಅನುಬಂಧ – 1

| ಕ್ರ.ಸಂ. | ಜಿಲ್ಲೆ | ಒತ್ತುವರಿಯಾಗಿರುವ ಗೋಮಾಳ ಸಂಖ್ಯೆ |
|---|---|---|
| 1 | ಬೆಂಗಳೂರು ನಗರ | 4881 |
| 2 | ಬೆಂಗಳೂರು ಗ್ರಾಮಾಂತರ | 6976 |
| 3 | ಬಾಗಲಕೋಟೆ | 6395 |
| 4 | ಬೆಳಗಾವಿ | 5540 |
| 5 | ಬಳ್ಳಾರಿ | 0 |
| 6 | ಬೀದರ್ | 8 |
| 7 | ಚಾಮರಾಜನಗರ | 1830 |
| 8 | ಚಿಕ್ಕಬಳ್ಳಾಪುರ | 3295 |
| 9 | ಚಿಕ್ಕಮಗಳೂರು | 11985 |
| 10 | ಚಿತ್ರದುರ್ಗ | 4148 |
| 11 | ದಕ್ಷಿಣ ಕನ್ನಡ(ಮಂಗಳೂರು) | 740 |
| 12 | ದಾವಣಗೆರೆ | 1044 |
| 13 | ಧಾರವಾಡ | 0 |
| 14 | ಗದಗ | 0 |
| 15 | ಹಾಸನ | 8400 |
| 16 | ಹಾವೇರಿ | 545 |
| 17 | ಕಲಬುರಗಿ | 1720 |
| 18 | ಕೊಡಗು | 16 |
| 19 | ಕೋಲಾರ | 3169 |
| 20 | ಕೊಪ್ಪಳ | 881 |
| 21 | ಮಂಡ್ಯ | 634 |
| 22 | ಮೈಸೂರು | 1436 |
| 23 | ರಾಯಚೂರು | 0 |
| 24 | ರಾಮನಗರ | 157 |
| 25 | ಶಿವಮೊಗ್ಗ | 3768 |
| 26 | ತುಮಕೂರು | 560 |
| 27 | ಉತ್ತರ ಕನ್ನಡ(ಕಾರವಾರ) | 118 |
| 28 | ಉಡುಪಿ | 160 |
| 29 | ವಿಜಯಪುರ | 8062 |
| 30 | ಯಾದಗಿರಿ | 232 |
| 31 | ವಿಜಯನಗರ | 0 |
| | ಒಟ್ಟು | 76700 |